# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | ಃ | 1097 |
| ಸದಸ್ಯರ ಹೆಸರು | ಃ | ಶ್ರೀ.ಎನ್.ಎಸ್.ಬೋಸ್‌ರಾಜು (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | ಃ | 13.03.2020 |
| ಉತ್ತರಿಸುವ ಸಚಿವರು | ಃ | ಪಶು ಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಯಚೂರು ಜಿಲ್ಲೆಯ ಪಶುಸಂಗೋಪನೆ ಇಲಾಖೆಯಲ್ಲಿ ಖಾಲಿ ಇರುವ ಒಟ್ಟು ಹುದ್ದೆಗಳು ಎಷ್ಟು; ಸದರಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯಲ್ಲಿ ಒಟ್ಟು 226 ಹುದ್ದೆಗಳು ಖಾಲಿ ಇರುತ್ತದೆ.<br><br>ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯ ಪುನರ್ ರಚನೆ ಆದೇಶದಂತೆ ಖಾಲಿ ಇರುವ ಸಹಾಯಕ ನಿರ್ದೇಶಕರ ಹಾಗೂ ಮುಖ್ಯ ಪಶುವೈದ್ಯಾಧಿಕಾರಿ ಮತ್ತು ಹಿರಿಯ ಪಶುವೈದ್ಯಾಧಿಕಾರಿಗಳ ಖಾಲಿ ಹುದ್ದೆಗಳನ್ನು ಹಂತ ಹಂತವಾಗಿ ಪಶುವೈದ್ಯಾಧಿಕಾರಿ ಹುದ್ದೆಯಿಂದ ಕಾಲಮಿತಿ ಮುಂಬಡ್ತಿ/ಪದನ್ನೋತಿ ಮುಖಾಂತರ ತುಂಬಲು ಕ್ರಮವಹಿಸಲಾಗಿದೆ.<br><br>**ಪಶುವೈದ್ಯಾಧಿಕಾರಿ ಹುದ್ದೆಗೆ ಸಂಬಂಧಿಸಿದಂತೆ:** ಕಲ್ಯಾಣ-ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ 61 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇಮಕಾತಿ ಮುಖಾಂತರ ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸಿದ್ದು, ನೇಮಕಾತಿ ಪ್ರಕ್ರಿಯೆ ಚಾಲನೆಯಲ್ಲಿದೆ.<br><br>**ಪಶುವೈದ್ಯಕೀಯ ಸಹಾಯಕರ ಹಾಗೂ ಪಶುವೈದ್ಯಕೀಯ ಪರೀಕ್ಷಕರ ಹುದ್ದೆಗೆ ಸಂಬಂಧಿಸಿದಂತೆ:** ಕಲ್ಯಾಣ-ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಪಶುವೈದ್ಯಕೀಯ ಸಹಾಯಕರ ವೃಂದದಲ್ಲಿ ಖಾಲಿ ಇರುವ 83 ಹುದ್ದೆಗಳು ಹಾಗೂ ಪಶುವೈದ್ಯಕೀಯ ಪರೀಕ್ಷಕರ 32 ಹುದ್ದೆಗಳ ಭರ್ತಿಗೆ ವಿಶೇಷ ನೇಮಕಾತಿ ನಿಯಮ ರಚಿಸಿ ಅಂತಿಮ ಅಧಿಸೂಚನೆ ಹೊರಡಿಸಲಾಗಿದ್ದು ಅರ್ಜಿ ಆಹ್ವಾನಿಸುವ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. |

| | | | |
|---|---|---|---|
| | | | ಇಲಾಖೆಯಲ್ಲಿ ಖಾಲಿ ಇರುವ "ಡಿ" ದರ್ಜೆ ಹುದ್ದೆಗಳಿಗೆ ಸರ್ಕಾರದ ಪತ್ರ ಸಂಖ್ಯೆ ಪಸಂಮೀ 31 ಪಅಸೇ 2018 ದಿನಾಂಕ 12.12.2018 ರನ್ವಯ ಹೊರಗುತ್ತಿಗೆ ಆಧಾರದ ಮೇಲೆ ಸೇವೆಯನ್ನು ಪಡೆಯಲಾಗಿದೆ. |
| ಆ) | ರಾಯಚೂರು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂಚಾರಿ ಆಸ್ಪತ್ರೆಗಳು ಎಷ್ಟು; ರಾಯಚೂರು ನಗರದಲ್ಲಿ ಪಶುಸಂಗೋಪನೆ ಇಲಾಖೆಯ ಜಂಟಿ ನಿರ್ದೇಶಕರ ಕಛೇರಿ ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | | ರಾಯಚೂರು ಜಿಲ್ಲೆಯಲ್ಲಿ ಒಟ್ಟು 05 ಸಂಚಾರಿ ಪಶುಚಿಕಿತ್ಸಾಲಯಗಳು ಕಾರ್ಯನಿರ್ವಹಿಸುತ್ತಿವೆ. ರಾಯಚೂರಿನಲ್ಲಿ ಜಂಟಿ ನಿರ್ದೇಶಕರ ಕಛೇರಿಯು ದಿನಾಂಕ.23.07.2018 ರಿಂದ ಪ್ರಾರಂಭಗೊಂಡು ಕಾರ್ಯನಿರ್ವಹಿಸುತ್ತಿರುತ್ತದೆ. |

ಸಂ: ಪಸಂಮೀ ಇ-46 ಪಸಸೇ 2020

(ಪ್ರಭು. ಬಿ.ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು